# ಶವಸಂಸ್ಕಾರ

(ಜೂಲಿಯಸ್ ಸೀಜರ್)

ಅನುವಾದಕ

ಚನ್ನಬಸವ

ಪ್ರಕಾಶಕರು

ಕನ್ನಡ ಗೆಳೆಯರ ಗುಂಪು

ಬಳ್ಳಾರಿ

1939

# ಅರ್ಪಣ

ಈ ಹೊತ್ತಿಗೆಯು

ಸುಪ್ರಸಿದ್ಧ ದೇಶಭಕ್ತರೂ ಕನ್ನಡನಾಡಿನ ಹಿರಿಯರೂ

ನಾಡು ನುಡಿಗಳ ಸೇವೆಯಲ್ಲಿ ನುರಿತ ಮುಂದಾಳುಗಳೂ

ಆಗಿ

೨೪ನೆಯ ಕನ್ನಡ ಸಾಹಿತ್ಯಸಮ್ಮೇಲನದ

ಅಧ್ಯಕ್ಷಪದವಿಗೇರಿದ

**ಶ್ರೀ ಮುದವೀಡು ಕೃಷ್ಣರಾಯರಿಗೆ**

ಅರ್ಪಿಸಲ್ಪಟ್ಟಿದೆ

ಪ್ರಕಾಶಕರು.

# ಕುಸುಮಾರ್ಚನೆ

ಕನ್ನಡಾಂಬೆಯೆ, ನಿನ್ನ ದಿವ್ಯಪಾದಾರ್ಚನೆಗೆ
ಕುಸುಮಗಳಕೂಡಿಡುವ ಸಾಸಗೈದಿಹೆನಾನು.
ಹುಟ್ಟುಗಬ್ಬಿಗರೆಂದೊ ಕೋದಿರುವ ಕಾವ್ಯಗಳ
ಪೂಮಾಲೆಯದು ನಿನ್ನಕಂಠದಲಿ ಮೆರೆಯುತ್ತಿರೆ,
ಕಾಡಿನಲಿ ಅಲೆದಲೆದು ಕಾಡಹೂವೊಂದನಾಂ
ಹುಡುಕಿ ತಂದಿಹೆ ನಿನ್ನ ದಿವ್ಯ ಪಾದಾರ್ಚನೆಗೆ.
ಕಾಡಹೂವೆಂದಿದನು ಧಿಃಕರಿಸದಿರು ತಾಯೆ.

**ನೆರಣಿಕಿ ಚನ್ನಬಸವ,**
ಸಹಕಾರ್ಯದರ್ಶಿ.
ಕ. ಗ. ಗುಂ.

---

ಸೂಚನೆ:— ೬ ನೆಯ ಪುಟದ ಮೂರನೆಯ ಪಂಕ್ತಿಯಲ್ಲಿ 'ಮಾಂಗಿಸುವನ್ನ' ಎಂದು ಓದಬೇಕು. ಇನ್ನೂ ಕೆಲವು ಅಚ್ಚಿನ ತಪ್ಪುಗಳಿವೆ. ಈ ಚಿಕ್ಕಹೊತ್ತಿಗೆಗೆ ಒಪ್ಪೋಲೆಯನ್ನು ಕೊಡುವುದನುಚಿತವೆಂದು ಬಿಟ್ಟಿದ್ದೇವೆ; ಕ್ಷಮಿಸಬೇಕು.



ಶ್ರೀ ತೋರಣಗಲ್ಲು ಮರೆಪ್ಪನವರು,

ಅಧ್ಯಕ್ಷರು.

ಕನ್ನಡ ಗೆಳೆಯರ ಗುಂಪು, ಬಳ್ಳಾರಿ.

---

# ಮುನ್ನುಡಿ.

ಇತ್ತೀಚೆಗೆ ಪ್ರಕಟವಾಗುವ ಕನ್ನಡ ಪುಸ್ತಕಗಳು ಮುನ್ನುಡಿಯಿಲ್ಲದೆ ಮುನ್ನಡೆಯುವಂತಿಲ್ಲವೆಂಬಂತಾಗಿದೆ. ಆದುದರಿಂದಲೇ, ಬಳ್ಳಾರಿಯಲ್ಲಿ ತಮ್ಮ ಸೇವೆಯಿಂದ ಕನ್ನಡ ನುಡಿಗೆ ಕಳೆಯೇರಿಸಬೇಕೆಂಬ ನಲ್ಮೆಯಿಂದ ಕೆಳೆಗೊಂಡ ಗೆಳೆಯರ ಗುಂಪಿನವರು ತಾವು ಮೊದಲನೆಯದಾಗಿ ಪ್ರಕಟಿಸುವ ಈ ಚಿಕ್ಕಪುಸ್ತಕದ ಮುನ್ನಡೆಗೆ ನನ್ನ ಮುನ್ನುಡಿಯು ಬೇಕೆಂದರು. ಅವರ ನಂಬಿಕೆಯು ಹೇಗೇ ಇರಲಿ, ಅವರು ಕೈಗೊಂಡ ಕಾರ್ಯಕ್ಕೆ ಒಲಿದ ನನ್ನ ಮನವು ಈ ಪುಸ್ತಕದ ಮುನ್ನುಡಿಯೊಂದೆರಡು ಮಾತನ್ನು ಬರೆಯಲು ನನ್ನನ್ನು ಮುಂದುವರಿಸಿತು.

ಭರತ ಖಂಡದಲ್ಲಿ ಸಂಸ್ಕೃತಕವಿಚಕ್ರವರ್ತಿಯೆನಿಸಿದ ಕಾಳಿದಾಸನಂತೆ ಇಂಗ್ಲಾಂಡಿನಲ್ಲಿ ಶೇಕ್ಸ್ಪಿಯರನು ಆಂಗ್ಲಕವಿ ಸಾರ್ವಭೌಮನೆನಿಸಿಕೊಂಡನು. ಆಂಗ್ಲೇಯರಿಗೆ ಹಿಂದೂದೇಶದ ಚಕ್ರಾಧಿಪತ್ಯಕ್ಕಿಂತಲೂ ಕವಿವರ್ಯನಾದ ಶೇಕ್ಸ್ಪಿಯರನೇ ಮಿಗಿಲೆಂದು ಆಂಗ್ಲಪಂಡಿತನಾದ ಕಾರ್ಲಾಯಿಲ್ಲನು ಹೇಳಿರುವುದರಿಂದ ಆಂಗ್ಲೇಯರಿಗೆ ಆ ಕವಿವರನಲ್ಲಿರುವ ಪ್ರೇಮಾಭಿಮಾನವೆಷ್ಟೆಂಬುದು ಒಡೆದು ಕಾಣುವುದು. ನಾಟಕ ರಚನೆಯಲ್ಲಿ ಅದ್ವಿತೀಯನೆನಿಸಿದ ಆ ಶೇಕ್ಸ್ಪಿಯರನ "ಜೂಲಿಯಸ್ ಸೀಜರ್" ಎಂಬ ನಾಟಕದಲ್ಲಿ ಮೂರನೆಯ ಅಂಕದ ಎರಡನೆಯ ದೃಶ್ಯವು ಆ ನಾಟಕದ ಹೃದಯದಂತಿರುವುದೆಂಬ ಪ್ರಸಿದ್ಧಿ

ಗೆ ಪಾತ್ರವಾಗಿದೆ. ಹೃದಯಂಗಮವಾದ ವಾಗ್ಭಣಿತಿಯಲ್ಲಿ ರೋಮನರ ದೇಶಾಭಿಮಾನದಿಂದುಂಟಾದ ಆವೇಶದ ಪರಿಣಾಮವೇನೆಂಬುದನ್ನು ಕವಿಯು ಆನಾಟಕದ ಹೃದಯದಿಂದೊಡಮೂಡಿಸಿರುವನು.

ಆ ಹೃದಯ ಚಿತ್ರವನ್ನು ಕನ್ನಡಿಗರಿಗೆ ಕನ್ನಡದ ಕನ್ನಡಿಯಲ್ಲಿ ತೋರಿಸಿ, ಚಿತ್ರಗಾರನಾದ ಶೇಕ್ಸ್ಪಿಯರನ ಯೋಗ್ಯತೆಯ ಪರಿಚಯವನ್ನು ಮಾಡಬಯಸಿದ ಬಳ್ಳಾರಿಯ ಗೆಳೆಯರ ಗುಂಪಿನವರು ಕನ್ನಡಿಗರ ಮನ್ನಣೆಗೆ ಪಾತ್ರರು.

ಇಂಗ್ಲೀಷಿನಲ್ಲಿ ಬರೆದ **Blank Verse,** ಎಂಬ ಕವಿತೆಗಳಂತೆ ಈಗಿನ ಕನ್ನಡಕವಿಗಳು ' ಸರಳರಗಳೆ ' ಯೆಂಬ ಹೆಸರಿನ ಕವಿತೆಗಳನ್ನು ಬರೆಯುತ್ತಿರುವರು. ಈ ಕವಿತೆಗಳಲ್ಲಿ ಪದ್ಯಶೈಲಿಯ ಗದ್ಯರೂಪವೇ ಬಹಳವಾಗಿ ಕಂಡುಬರುವುದು. ಸರಳರಗಳೆಯ ಛಂದಸ್ಸಿನ ವಿಷಯಕವಾದ ಚರ್ಚೆಯೊಂದು ಕನ್ನಡಿಗರಲ್ಲಿಷ್ಟೇ ಇರುವುದು. ಅದನ್ನು ವಿವರಿಸುವುದು ಈಚಿಕ್ಕಪುಸ್ತಕದ ಮುನ್ನುಡಿಗೆ ಅನುಚಿತ.

ಕನ್ನಡಗೆಳೆಯರ ಗುಂಪಿನವರಲ್ಲಿ ಒಬ್ಬರಾದ ಶ್ರೀಯುತ ಚನ್ನಬಸವ ಎಂಬವರು ಸರಳರಗಳೆಯಲ್ಲಿಯೇ ಮೂಲ ನಾಟಕದ ಇಂಗ್ಲೀಷು ಕವಿತೆಗಳನ್ನು ಇದರಲ್ಲಿ ಕನ್ನಡಿಸಿರುವರು. ಪ್ರಥಮ ಪ್ರಯತ್ನವಾದರೂ ಲೇಖಕರ 'ಲೇಖನಶೈಲಿಯು ಸರಳವಾಗಿ ಅರ್ಥಪುಷ್ಟಿಯನ್ನೊಳಗೊಂಡಿದೆ. ಬರಬರುತ್ತಾ ಈತರುಣಲೇಖ

ಕರ ಲೇಖನಶೈಲಿಯು ಸರ್ವಕನ್ನಡಿಗರ ಮೆಚ್ಚುಗೆಯನ್ನು ಪಡೆ ಯದಿರಲಾರದು. ಕನ್ನಡ ಸಾಹಿತ್ಯದ ಬೆಳವಣಿಗೆಯ ಸೇವೆಗೆ ಈತಹ ಉತ್ಸಾಹಿ ಲೇಖಕರು ವಿಜಯನಗರ ಪ್ರಾಂತದಲ್ಲಿ ಇನ್ನೂ ಬಹಳ ಜನರು ಮುಂದುವರಿಯಬೇಕೆಂಬುದೇ ನನ್ನ ಹಿರಿಯಾಶೆ.

ಕನ್ನಡ ಗೆಳೆಯರ ಗುಂಪಿನ ಕನ್ನಡ ಭಾಷಾಸೇವೆಯ ಪ್ರಥ ಮ ಪ್ರಯತ್ನದ ಫಲವಾದ ಈ ಪುಟ್ಟಪುಸ್ತಕಕ್ಕೆ ಸರ್ವ ಕನ್ನ ಡಿಗರಿಂದಲೂ ಪ್ರೋತ್ಸಾಹ ದೊರೆಯಲೆಂದು ಹಾರೈಸುವ.

ವೈ. ನಾಗೇಶಶಾಸ್ತ್ರಿ.

## ಮೆಚ್ಚೋಲೆ.

ಬಳ್ಳಾರಿಯ " ಕನ್ನಡ ಗೆಳೆಯರ ಗುಂಪಿನ " ಉತ್ಸಾಹಿ ಲೇಖಕರಾದ ಶ್ರೀ ವರ್ಮಾ ಚನ್ನಬಸವ ಎಂಬವರು ಶೇಕ್ಸ್‌ಪಿಯರ್ ಮಹಾಕವಿಯ " ಜೂಲಿಯಸ್ ಸೀಜರ್ " ನಾಟಕದ ಮೂರ ನೆಯ ಅಂಕದಲ್ಲಿಯ ಎರಡನೆಯ ದೃಶ್ಯವನ್ನು ಮೂಲನಾಟ ಕದ ಅರ್ಥಪುಷ್ಟಿಯ ಸೊಗಸಿಗೆ ಭಂಗಬರದಂತೆಯೂ, ಸರಿ ಯಾದ ಶಬ್ದಗಳ ಜೋಡಣೆಯಿಂದಲೂ, ಸರಳವಾಗಿ ಕನ್ನಡ ದಲ್ಲಿ ಭಾಷಾಂತರಿಸಿರುವರು.

ಲೇಖಕರಿಗೂ, " ಕನ್ನಡಗೆಳೆಯರ ಗುಂಪಿ " ನವರಿಗೂ ನನ್ನ ಹೃತ್ಪೂರ್ವಕ ಅಭಿನಂದನೆಗಳು.

ವೈ. ಮಹಾಬಲೇಶ್ವರಪ್ಪ,

ಅಧ್ಯಕ್ಷ, ಕರ್ನಾಟಕ ಚೇಂಬರ್ ಆಫ್ ಕಾಮರ್ಸ್.

# OPINION.



The writer, Sjt. C. D. Neraniki, of this little piece, **'SAVA SAMSKARA,'** is to be Congratulated on his Vigorous and robust style. He can be added to the list of those modern writers in Kannada, who have proved the powerful reach of the Kannada language in conveying pregnant thoughts to the Kannada public. I wish, however, he will take to original themes in Kannada.

Bellary. }
9-12-39. }

**T. Raghava.**

# ಬಿನ್ನಹ.

ಶ್ರೀಮಾನ್ ಕೆ. ವಿ. ಪುಟ್ಟಪ್ಪನವರ "ರಕ್ತಾಕ್ಷಿ" ಮತ್ತು "ಬಿರುಗಾಳಿ" ಈ ಎರಡು ನಾಟಕಗಳನ್ನು ಹಲವುಸಲ ಓದಿದ ಫಲಿತಾಂಶವಾಗಿ ನಾನು ಈಚಿಕ್ಕ ಹೊತ್ತಗೆಯನ್ನು ಬರೆದು ಕನ್ನಡಿಗರ ಮುಂದಿಡಲು ಶಕ್ತನಾದೆನು. ಇದರಲ್ಲಿ ನನ್ನ ಸ್ವಂತದ್ದೇನೂ ಇಲ್ಲ. ವಸ್ತುವು ಆಂಗ್ಲಕವಿಯಾದ ಶೇಕ್ಸ್ಪಿಯರನದು; ಶೈಲಿಯು ಶ್ರೀಮಾನ್ ಕೆ. ವಿ. ಪುಟ್ಟಪ್ಪನವರದು. ಇವರೀರ್ವರ ಆತ್ಮಗಳೇ ನನ್ನನ್ನು ಈ ಕಾರ್ಯಕ್ಕೆ ಪ್ರೇರೇಪಿಸಿದುವೆಂದು ನನ್ನ ನಂಬಿಕೆ. ಇಲ್ಲವಾದರೆ ನಾನೆತ್ತ ಈಕಾರ್ಯ ವೆತ್ತ?

ತಾವೇ ಬಿತ್ತಿದ ಬೀಜದ ಫಲವಾದ ಈ ನನ್ನ ಪುಟ್ಟಪುಸ್ತಕಕ್ಕೆ ತಮ್ಮ ಅಮೂಲ್ಯವಾದ ಮುನ್ನುಡಿಯನ್ನಿತ್ತ ನನ್ನ ವಿದ್ಯಾಗುರುಗಳಾದ ಶ್ರೀಮಾನ್ ವೈ. ನಾಗೇಶಶಾಸ್ತ್ರಿಗಳು, ಮೈಸೂರು ಆಸ್ಥಾನ ವಿದ್ವಾನ್, ಇವರಿಗೆ ನನ್ನ ಹೃತ್ಪೂರ್ವಕ ವಂದನೆಗಳು.

ಬಹುಕಾಲದನಂತರ ನನ್ನನ್ನು ಹಿತಕಾರ್ಯದಲ್ಲಿ ಯೋಜಿಸಲು ಮತ್ತೂ ನನ್ನ ಗುಣೋತ್ಕರವನ್ನು ವಿಕಾಸಿಸಲು ನೆರೆದು ನನ್ನನ್ನು ಪ್ರೋತ್ಸಾಹಿಸಿ, ಇದನ್ನು ಬರೆಸಿ, ಪ್ರಕಾಶಕ್ಕೆ ತಂದ ನನ್ನ ಹಳೆಯ ಪ್ರಿಯಮಿತ್ರರಾದ ಶ್ರೀಯುತ ಬಿ. ಯಂ. ಮರುಳಸಿದ್ಧಯ್ಯನವರಿಗೆ ನಾನು ತುಂಬಾ ಆಭಾರಿಯಾಗಿದ್ದೇನೆ.

ಬಳ್ಳಾರಿ
5-12-39 } ಚ. ದೊ. ನೆರಣಿಕಿ

# ಪ್ರಕಾಶಕರ ನುಡಿ.

ಸಾಹಿತ್ಯವೇ ಜೀವನ. ಸಾಹಿತ್ಯಕ್ಕೂ ಜೀವನಕ್ಕೂ ನಿಕಟ ಸಂಬಂಧವಿದೆ. ಜನತೆಯ ಸಂಸ್ಕೃತಿಯೇ ಸಾಹಿತ್ಯದ ಗುರಿ. ಜನರ ಜೀವನವನ್ನೇ ಸಾಹಿತ್ಯವು ಚಿತ್ರಿಸುತ್ತದೆ. ಆದ್ದರಿಂದ ಜನತೆಯ ಜೀವನದಲ್ಲಿ ಬದಲಾವಣೆಗಳಾದಂತೆ ಸಾಹಿತ್ಯದಲ್ಲಿಯೂ ಮಾರ್ಪಾಡಾಗುತ್ತದೆ. ಹಿಂದಿನ ಕವಿತೆಗೂ ಇಂದಿನ ಕವಿತೆಗೂ ಇರುವ ಭೇದಕ್ಕೆ ಕಾರಣವಿದೆ. ಆದ್ದರಿಂದ ಇಂಥಾ ಸಾಹಿತ್ಯವನ್ನು ಬೆಳೆಸುವುದು ನಮ್ಮ ಆದ್ಯ ಕರ್ತವ್ಯವಾಗಿದೆ.

ಕನ್ನಡಗೆಳೆಯರ ಗುಂಪಿನವರಾದ ನಾವು ಇಂಥಾ ಚಿಕ್ಕ ಹೊತ್ತಗೆಗಳನ್ನು ಆಗಿಂದಾಗ್ಗೆ ಪ್ರಕಟಿಸಬೇಕೆಂಬ ಹಿರಿಯಾಸೆಯುಳ್ಳವರಾಗಿದ್ದೇವೆ. ಗುಂಪಿನ ಪೋಷಕರಾಗಿ ಸಹಾಯಮಾಡಿದ ಶ್ರೀಮಾನ್ ತೋರಣಗಲ್ಲು ಮರೆಪ್ಪನವರಿಗೂ ಇತರ ಭಾಷಾಭಿಮಾನಿಗಳಿಗೂ ನಾನು ತುಂಬಾ ಆಭಾರಿಯಾಗಿದ್ದೇನೆ. ಇದರಂತೆ ಕನ್ನಡಿಗರ ಬೆಂಬಲಶಿಕ್ಕಲ್ಲಿ ಗಡಿನಾಡ ಪ್ರಾಂತವಾದ ಬಳ್ಳಾರಿ ಜಿಲ್ಲೆಯಲ್ಲಿ ಕನ್ನಡಮುನ್ನಡೆಯು ಯಶಸ್ವಿಯಾಗುವುದೆಂಬುವದರಲ್ಲಿ ಸಂದೇಹವಿಲ್ಲ.

| | |
|---|---|
| ಗೀತಾ ಭಾಂಡಾಗಾರ<br>ಭಾರತ ಕುಟೀರ<br>ಬಳ್ಳಾರಿ. | ಬಿ. ಯಂ. ಮರುಳಸಿದ್ದಯ್ಯ,<br>ಕಾರ್ಯದರ್ಶಿ,<br>ಕ. ಗೆ. ಗುಂ. |

# ಜೂಲಿಯಸ್ ಶೀಜರನ ಕೊಲೆ.

ಅತಿ ಪುರಾತನಕಾಲದಲ್ಲಿಯೇ ಉನ್ನತಶಿಖರವನ್ನೇರಿ ಜಗದ್ವಿಖ್ಯಾತವಾದ ರೋಮ್ ಸಾಮ್ರಾಜ್ಯವು ಕಾಲ ಚಕ್ರದ ಗತಿಯನ್ನನುಸರಿಸಿ ಇಂದು ಹೇಳ ಹೆಸರಿಲ್ಲದಂತಾಗಿದೆ. ಆಗ್ಯೆ ಅಲ್ಲಿನ ಜನರು ಸಂಪೂರ್ಣ ಸ್ವಾತಂತ್ರ್ಯ ಪ್ರೇಮಿಗಳಾಗಿದ್ದರು. ಸ್ವಾತಂತ್ರ್ಯವೇ ಅವರ ಜೀವನದ ಗುರಿಯಾಗಿದ್ದಿತು. ರಾಜನೆಂಬ ಓರ್ವ ನಿರಂಕುಶಾಧಿಕಾರಿಯ ಗುಲಾಮರಾಗಿರಕೂಡದೆಂಬುದು ಅವರ ಕುಲಸಂಪ್ರದಾಯವಾಗಿದ್ದಿತು. ಸ್ವಾತಂತ್ರ್ಯವೇ ಜೀವನ ( **Freedom is life** ) ವೆಂಬುದು ಅವರ ಜೀವಗೀತೆಯಾಗಿದ್ದಿತು. ರಾಜ ಎಂಬ ಶಬ್ದವನ್ನೇ ಅವರು ಅಕ್ಷರಶಃ ದ್ವೇಷಿಸುತ್ತಿದ್ದರು. ಆದರೆ ಪ್ರಜಾಸತ್ತಾತ್ಮಕ ರಾಜ್ಯಭಾರವು ಪ್ರಜಾಪ್ರತಿನಿಧಿಗಳ ಮಂತ್ರಾಲೋಚನಾಸಭೆಯ ಸಲಹೆಯ ಮೇರೆಗೆ ಪ್ರಜಾಮನೋರಂಜಕನೂ ಯೋಗ್ಯನೂ ಆದ ಓರ್ವ ಸರ್ವಾಧಿಕಾರಿ (**Imperator**) ಯಿಂದ ಸುವ್ಯಸ್ಥಿತವಾಗಿ ನಡೆಯುತ್ತಿತ್ತು.

ಸಂಪ್ರದಾಯದಂತೆ ಪ್ರಬಲನೂ ಪ್ರಜಾಹಿತೈಷಿಯೂ ಆದ ಜೂಲಿಯಸ್ ಶೀಜರ್ ಎಂಬ ಓರ್ವ ಸೈನ್ಯಾಧಿಪತಿಯು ಸರ್ವಾಧಿಕಾರಿಯ ಪದವಿಗೆ ಬಂದನು. ಜೂಲಿಯಸ್ ಶೀಜರನು ಅಚ್ಚುಕೆಚ್ಚೆದೆಯ ವೀರನು; ದಯಾಮಯನು; ಆಕಾಂಕ್ಷಾ

ರಹಿತನು ಸಾವಿಗಂಜುವವನಲ್ಲ. ಅಪಾಯವನ್ನು ಪ್ರತಿಭಟಿ ಸಬಲ್ಲವನು. ಧೃವ ನಕ್ಷತ್ರದಂತೆ ದೃಢಮನೋಗತಿಯುಳ್ಳವನು ತನ್ನ ಯೋಗ್ಯ ಪ್ರತಿಭಾ ಪ್ರಭಾವದಿಂದ ಹೆಸರಿಗೆ ಸರ್ವಾಧಿಕಾರಿ ಯ ಪದವಿಯಲ್ಲಿದ್ದರೂ ಕೃತಿಯಿಂದ ಚಕ್ರಾಧಿಪತಿಗೆ ಕಡಿಮೆ ಯಿಲ್ಲದ ಪದವಿಯನ್ನು ಪಡೆದುಕೊಂಡನಲ್ಲದೆ ಅಪಹರಿಸಲಿಲ್ಲ. ಅವನು ರೋಮ್ ಚಕ್ರಾಧಿಪತ್ಯದದೇವ (Demi God) ರೆಂದು ಪರಿ ಗಣಿಸಲ್ಪಡುತ್ತಿದ್ದನು.

ಜೂಲಿಯಸ್ ಶೀಜರನು ಸರ್ವಾಧಿಕಾರಿಯಾಗುವುದಕ್ಕೆ ಮುಂಚೆ ಸೈನ್ಯಾಧಿಕಾರಿಯಾಗಿರುವಾಗ ನೆರ್ವಿಯರೆಂಬ ಜರ್ಮನ್ ವಂಶದ ಒಂದು ಜನಾಂಗವನ್ನು ಸೋಲಿಸಿ ಪ್ರಖ್ಯಾತನಾದನು. ಮಂತ್ರಾಲೋಚನಾ ಸಭೆಯ ಸಭಾಸದನಾಗಿ ಅನೇಕ ಪ್ರಜರಿಗೆ ದೊಡ್ಡ ಅಧಿಕಾರಿಗಳ ವಶದಲ್ಲಿದ್ದ ಭೂಮಿಯನ್ನು ಹಂಚಿಕೊಡುವ ಒಂದು ಶಾಸನವನ್ನು ಮಂಜೂರುಮಾಡಿಸಿ ಜನರ ಪ್ರೀತಿಗೆ ಪಾತ್ರನಾಗಿದ್ದನು.

ಶೀಜರನ ಸಮಾನನಾಗಿ ಶಾಸನ ಸಭೆಯಲ್ಲಿ ಬಹುಮತವ ಬೆಂಬಲಪಡೆದಿದ್ದ ಪಾಂಪೆಯೆಂಬ ಮತ್ತೊಬ್ಬ ವೀರನು ಒಂದು ವಿರುದ್ಧ ಪಕ್ಷವನ್ನು ಬಲಪಡಿಸಿದನು. ಕೊನೆಗೆ ಜೂಲಿಯಸ್ ಶೀಜರನು ಶಾಸನ ಸಭೆಯ ಬದ್ಧ ಶತ್ರುವೆಂದು ಪ್ರಕಟಿಸಿದನು. ಆದರೆ ಶೀಜರನು ತನ್ನ ಸೈನ್ಯದೊಡನೆ ಬಂದಾಗ ಅವನನ್ನು

ಎದುರಿಸುವ ಧೈರ್ಯವು ಪಾಂಪೆಯು ಸಕ್ಷಕ್ಕಿರಲಿಲ್ಲ. ಪಾಂಪೆಯು ಪಲಾಯನವಾದನು ಶೀಜರನೇ ಸರ್ವಾಧಿಕಾರಿಯಾಗಿ ಪ್ರತಿಪಕ್ಷದ ಎಷ್ಟೋ ಮುಖಂಡರಿಗೆ ದೊಡ್ಡ ಪದವಿಗಳನ್ನು ಕೊಟ್ಟನು ಬಿದ್ದು ಹೋಗಿದ್ದ ಪಾಂಪೆಯ ವಿಗ್ರಹವನ್ನು ಪುತ್ತು ನಿಲ್ಲಿಸಿದನು

ಬ್ರೂಟಸ್, ಕ್ಯಾಷ್ಯಸ್, ಆಂಟೋನಿ ಮುಂತಾದವರು ಶಾಸನ ಸಭೆಯ ಸದಸ್ಯರು. ಆಂಟೋನಿ, ಬ್ರೂಟಸರು ಶೀಜರನ ಪ್ರೀತಿಯ ಗೆಳೆಯರು. ಕ್ಯಾಷ್ಯಸನಿಗೆ ಶೀಜರನ ವೈಭವವನ್ನು ನೋಡಿ ಸಹಿಸಲಾಗಲಿಲ್ಲ. ತಾನು ಶೀಜರನ ಸಮಾನನೇಕೆ ಅವನಿಗಿಂತ ಒಂದುಪಾಲು ಅಧಿಕನೆಂದು ತಿಳಿದಿದ್ದನು. ಆದ್ದರಿಂದ ಶೀಜರನು ಅಷ್ಟು ದೊಡ್ಡ ಪದವಿಯಲ್ಲಿರುವುದು ಅವನಿಗೆ ಸರಿಬೀಳಲಿಲ್ಲ. ಹೇಗಾದರೂ ಮಾಡಿ ಶೀಜರನನ್ನು ಕೊನೆಗಾಣಿಸಬೇಕೆಂಬುದೇ ಅವನ ಇಚ್ಛೆ. ಅದನ್ನು ಸಾಧಿಸಲು ಸಮಯವನ್ನು ನಿರೀಕ್ಷಿಸುತ್ತಿದ್ದನು.

ಶೀಜರನು ರಾಜನಾಗುವುದು ಹಲವರಿಗೆ ಬೇಕಾಗಿದ್ದಿತು. ಅಂಥವರಲ್ಲಿ ಆಂಟೋನಿಯು ಮೊದಲನೆಯವನು. ಲೂಪರಿಕಲ್ ಎಂಬ ಒಂದು ಸಾರ್ವಜನಿಕ ಪಾರ್ಕಿಕೋತ್ಸವಕಾಲದಲ್ಲಿ ಶೀಜರನಿಗೆ ಒಂದು ಕಿರೀಟವನ್ನಿತ್ತು ಅದನ್ನು ಧರಿಸಲು ಹೇಳಿದನು ಆದರೆ ಶೀಜರನು ನಿರಾಕರಿಸಿದನು. ಇದನ್ನು ಕಂಡು ಜನರು ಹಿರಿಹಿರಿ ಹಿಗ್ಗಿದರು.

ಆದರೆ ಕ್ಯಾಸ್ಯಸನು ಶೀಜರನಿಗೆ ರಾಜನಾಗುವ ಮಹತ್ವಾಕಾಂಕ್ಷೆ ಯಿರುವುದೆಂಬ ನೆವದಿಂದ ತನ್ನ ದ್ವೇಷಸಾಧನೆಗುದ್ಯುಕ್ತನಾದನು. ಅತ್ತ ಲೂಪರಿಕಲ್ ಉತ್ಸವವು ಜರುಗುತ್ತಿರುವಾಗ ಇತ್ತ ಕ್ಯಾಸ್ಯಸನು ಬ್ರೂಟಸನನ್ನು ಕಂಡು ಈರೀತಿ ಹೇಳಿದನು.

"ಬ್ರೂಟಸನೆ, ಶೀಜರನ ಹಿಂಸೆಗೆ ಮೇರೆಯಿಲ್ಲದಂತಾಗಿದೆ. ಪ್ರಜೆಗಳು ಅವನ ಅತ್ಯಾಚಾರವನ್ನು ಸಹಿಸಲಾರದೆ ನಿನ್ನ ಸಹಾಯವನ್ನು ಕೋರುತ್ತಿದ್ದಾರೆ. ಅವರನ್ನು ಈ ಕಷ್ಟಪರಂಪರೆಗಳಿಂದ ಮುಕ್ತರನ್ನಾಗಿ ಮಾಡುವವರು ನಿನ್ನ ಹೊರತು ಬೇರೆ ಗತಿಯಿಲ್ಲವಂತೆ. ಹೀಗಿರಲು ನೀನು ನಿನ್ನನ್ನೇ ಮರೆತು ಸುಷುಪ್ತಾವಸ್ಥೆಯಲ್ಲಿರುವಂತೆ ತೋರುತ್ತದೆಯಲ್ಲಾ? ಬ್ರೂಟಸನಿಗೆ ತನ್ನ ಯೋಗ್ಯತೆಯ ಅರಿವು ಉಂಟಾಗಿದ್ದರೆ ಒಳಿತಾಗುತ್ತಿತ್ತೆಂದು ಎಷ್ಟೋ ಮಹಾಮಹಾ ವ್ಯಕ್ತಿಗಳು ಅನ್ನುತ್ತಿದ್ದುದನ್ನು ನಾನೇ ಈ ಕಿವಿಗಳಿಂದ ಕೇಳಿದ್ದೇನೆ. ಇದು ಸಟೆಯಲ್ಲ. ಎಚ್ಚರಗೊಳ್ಳು! ಕಣ್ದೆರೆ! ದಾಸ್ಯ ಶೃಂಖಲೆಯಲ್ಲಿ ನರಕಯಾತನೆಯನ್ನನುಭವಿಸುತ್ತಿರುವ ರೋಮನರಗೋಳು ದೇಶಭಕ್ತನಾದ ನಿನಗೆ ಕೇಳಿಸದೇ? ಕಣ್ಣುಗಳಿದ್ದೂ ನೋಡದಿರಬಹುದೇ? ಕಿವಿಗಳಿದ್ದೂ ಕೇಳದಿರುವುದು ನ್ಯಾಯವೇ?

ನಮ್ಮಂತೆ ಶೀಜರನೂ ಓರ್ವಮಾನವನಲ್ಲವೆ? ನಾವು ಅವನಂತೆ ಹುಟ್ಟಿ, ಉಂಡು, ಬೆಳೆದಿದ್ದೇವೆ. ಶಕ್ತಿಯುಲ್ಲಿಯೂ

V

ತುಸು ಹೆಚ್ಚಿನವನಂತಿದ್ದೇನೆ. ಏಕೆ, ಅವನೊಮ್ಮೆ ಟೈಬರ್ ನದಿಯಲ್ಲಿ ಈಜುವಾಗ ಎದೆಗುಂದಿ ಕಿರುಚಲು ನಾನು ಕಾಪಾಡಿದ್ದೇನೆ. ಮತ್ತೊಮ್ಮೆ ಜ್ವರಗ್ರಸ್ತನಾದಾಗ ಅವನು ಒಂದುಹೆಂಗಸಿನಂತೆ ಚೀರಿದ್ದನ್ನು ನಾನು ಕೇಳಿದ್ದೇನೆ.

ಸೀಜರ್, ಬ್ರೂಟಸ್ ಇವೆರಡು ಹೆಸರುಗಳಲ್ಲಿರುವ ಭೇದವಾದರೂ ಏನು? ಎರಡನ್ನೂ ಜೊತೆಯಲ್ಲಿ ಬರೆ, ಸಮಬಹವು ತೂಗಿ ನೋಡಿದರೆ, ಎರಡೂ ಒಂದೆ. ಸೀಜರನು ಅಮರನಾಗಿ ಮೆರೆವುದೇಕೆ? ಕಾರಣವೇನು? ನಮ್ಮ ಗ್ರಹಚಾರವಲ್ಲ; ನಮ್ಮ ನಿರ್ಲಕ್ಷ್ಯ, ನಿರ್ಲಜ್ಜೆ. ಟಾರ್ಕ್ವಿನನೆಂಬ ರಾಜನನ್ನು ಅಡವಿಗಟ್ಟಿ ಅವನಿಗೆ ಸಹಾನುಭೂತಿ ತೋರಿದ ತನ್ನ ಕುವರರನ್ನು ಕೊಂದಿಕ್ಕಿದ ಆ ಬ್ರೂಟಸನ ಪೂತ ವಂಶಜನಲ್ಲವೇ ನೀನು! ಅಕಟಕಟ! ಸರ್ವನಾಶವಾಯ್ತು. ರೋಮ್ ರಾಜ್ಯವು ಓರ್ವ ಮಾನವಮಾತ್ರ ವ್ಯಕ್ತಿಯ ದಾಸ್ಯತ್ವದಲ್ಲಿ ನರಳಬೇಕಾಯ್ತು. ಅವನು ನುಡಿದುದೇ ದೇವವಾಕ್ಯ. ನಾವೆಲ್ಲರೂ ಅವನ ಪಾದಧೂಳಿಗೆ ಸಮಾನರು ವ್ಯಕ್ತಿ ಸ್ವಾತಂತ್ರ್ಯ, ಭಾಷಣ ಸ್ವಾತಂತ್ರ್ಯ, ರಾಜಕೀಯ ಸ್ವಾತಂತ್ರ್ಯವೆಂದು ಯುಗ ಯುಗಾಂತರಗಳಿಂದ ಹೆಮ್ಮೆಪಡುತ್ತಿದ್ದ ರೋಮ್ ಜನಾಂಗವು ಇಂದು ಒಬ್ಬವ್ಯಕ್ತಿಯ ಕೈಗೊಂಬೆಯಾಗಿದೆ.

ಹಾಯ್! ಹಾಯ್! ಗೆಳೆಯಾ, ಅಗೋ ನೋಡು ನಮ್ಮ ಪೂರ್ವ

ಜನರು ಅಂತರಿಕ್ಷದಲ್ಲಿ ನಿಂತು ನಮ್ಮ ಹೇಡಿತನಕ್ಕೆ ನಮ್ಮನ್ನು ಹೀಯ್ಯಾಳಿಸುತ್ತಿದ್ದಾರೆ, ನಗುತ್ತಿದ್ದಾರೆ. ಅವರ ನಗು ಕರ್ಕಶವಾದ ಬಾಣಪರಂಪರೆಯಂತೆ ನನ್ನ ಹೃದಯವನ್ನು ಭೇದಿಸಿ ಸಹಿಸಲಾಗದ ಯಾತನೆಯನ್ನುಂಟು ಮಾಡುತ್ತಿದೆ. ನೀನು ನಿನಗೆ ಕಾಣಿಸದೇ? ಗೆಳೆಯಾ, ಕಣ್ತೆರೆ ಬಹಿರಿಂದ್ರಿಯಗಳಿಗಗೋಚರವಾದ ಭಾವನಾ ಪ್ರಪಂಚದ ವ್ಯವಹಾರಗಳನ್ನು ಕಾಣಬಲ್ಲ ಜ್ಞಾನಚಕ್ಷುವೆಂಬ ಮೂರನೆಯ ಚಕ್ಷುವನ್ನು ತೆರೆ. ಅಂದರೆ ಎಲ್ಲವೂ ಸ್ಪಷ್ಟವಾಗುವುದು.

ಗೆಳೆಯಾ ಕ್ಷಮಿಸು. ಸಾರ್ವಜನಿಕ ಹಿತದೃಷ್ಟಿಯಿಂದ ಇಷ್ಟು ಮಾತನಾಡಿದೆನು. ವಿಚಾರಮಾಡಿ ನೋಡು. ಶೀಘ್ರವಾಗಿ ನಿನ್ನ ಕರ್ತವ್ಯವನ್ನು ನೆರವೇರಿಸಲನುವಾಗು. ಕರೆ ಬಂದಿದೆ. ಹಿಂಜರಿಯ ಬೇಡ. ರೋಮಿನ ಕೀರ್ತಿಯು ಅಳಿಯಬೇಕಾದರೂ ನಿನ್ನಿಂದ ಉಳಿಯಬೇಕಾದರೂ ನಿನ್ನಿಂದ. ಅವೆರಡರ ತೀರ್ಮಾನದ ಕಾಲವು ಸಮೀಪಿಸಿದೆ.”

ಇದನ್ನು ಕೇಳಿ ಬ್ರೂಟಸನು ವಿಚಾರಮಗ್ನನಾದನು. ಇನ್ನೆಷ್ಟೋ ಇತರ ದೃಷ್ಟಾಂತಗಳಿಂದ ಸೀಜರನು ಮಹತ್ವಾಕಾಂಕ್ಷಿಯಿರುವನೆಂದು ನಿರ್ಧರಿಸಿದನು. ಕಡೆಗೆ ಸೀಜರನ ಕೊಲೆಮಾಡುವ ಪಿತೂರಿಯು ನಡೆಯಿತು. ಅದರಲ್ಲಿ ಆಂಟೋನಿಯು ಹೊರತು ಉಳಿದ ಎಲ್ಲಾ ಶಾಸನ ಸಭೆಯ ಸಭಾಸದರು ಭಾಗವಹಿಸಿದರು. ಎಲ್ಲರೂ ಸೇರಿ ಶಾಸನಸಭಾಭವನದಲ್ಲಿ ಸೀಜರನ ಕೊಲೆಮಾಡಿದರು.

# ಶವ ಸಂಸ್ಕಾರ

## (ಜೂಲಿಯಸ್ ಶೀಜರ್)

### ಅಂಕ ಮೂರು

### ದೃಶ್ಯ ೨

ರೋಮ್ ನಗರ—ಪೇಟೆ.

(ಬ್ರೂಟಸನುಂ, ಕ್ಯಾಷ್ಯಸನು ಮಂತೆ ಪುರಜನರುಂ ಬರುವರು)

ನಾಗರಿಕರು:- ತೃಪ್ತರಾಗುವೆವಾವು; ತೃಪ್ತರಾಗೋಣ.

ಬ್ರೂಟಸ್:- ಅಪ್ಪೊಡೆನ್ನಂ
ಹಿಂಬಾಲಿಸಿರಿ, ಪೆಣ್ ಕಿವಿಗೊಡಿರೆನಗೆ, ಸಖರೆ.
ಕ್ಯಾಷ್ಯಸನೆ, ನೀನಿತರ ರಾಜವೀಥಿಗೆ ನಡೆ.

ನಂವಣೆಯು ವಿಂಗಡಿಸು,
ಎನಗೆ ಕಿವಿಗೊಡಲಿಚ್ಛಿಪರು, ನಿಲ್ಲಲವರಿಲ್ಲಿಯೇ;
ಕ್ಯಾಷ್ಯಸನ ನನುಸರಿಪರು, ನಡೆಯಿರವನೊಡನೆ,
ಶೀಜರನ ಮರಣದಾಬಹಿರಂಗ ಕಾರಣಗಳ
ತಿಳಿಸುವೆವು.

ಒಂದನೆ: ಬ್ರೂಟಸನು ಹೇಳುವುದ ಕೇಳುವೆನು.

ಎರಡನೆ: ಕ್ಯಾಷ್ಯಸಗೆ ಕಿವಿಗೊಡುವೆನಾಂ; ಮೇಣವರ
ಹೇತುಗಳ ಹೋಲಿಸುವ,
ಪ್ರತ್ಯೇಕವಾಗವನು ಕೇಳಿ ತಿಳಿದಮೇಲೆ.

(ಪಲವು ಪುರಜನರೊಡನೆ ಕ್ಯಾಷ್ಯಸನು ಪೋಗುವನು.
ಬ್ರೂಟಸನು ಭಾಷಣದ ಗದ್ದುಗೆಗೆ ನಡೆಯುವನು)

ಮೂರನೆ:- ಮಾನ್ಯನಹ ಬ್ರೂಟಸನು ಗದ್ದುಗೆಯ ನೇರಿದನು.
ಸುಮ್ಮನಿರಿ !

ಬ್ರೂ: ತೆಪ್ಪನಿರಿ ಮುಗಿಯುವನ್ನೆಂ.
ರೋಮನರೆ, ನಾಡವರೆ, ನೇಹಿಗರೆ! ನನ್ನನಿಲುವಾಗಿ
ಲಾಲಿಸಿರಿ; ಸುಮ್ಮನಿರಿ ಕೇಳಲನುವಪ್ಪಂತೆ: ಎನ್ನ
ಘನತೆಗೋಸ್ಕರಮೆನ್ನಂ ನೆಚ್ಚಿರೈ; ನೆಚ್ಚಲನುವಪ್ಪೊ
ಲೆನ್ನ ಘನತೆಗೆ ಮನ್ನಣೆಕೊಡಿರಿ: ಬುದ್ಧಿಪೂರ್ವಕ
ಮೆನ್ನಂ ಪರಿಕಿಸಿರಿ: ಪರೀಕಿಸಲು ಬರುವಂತೆ, ನಿಮ್ಮ

ಅರಿವನೆಚ್ಚರಿಸಿರಿ. ಶೀಜರನ ಸ್ನೇಹಿಗರೊಳಾವನಾದೊ ಡೊರ್ವನುಳ್ಳೊಡೀ ಕೂಟದೊಳು, ಅವನಿಗಾಂ ಪೇಳುವೆನು, ಶೀಜರನ ಮೇಲವನಿಗಿದ್ದ ನಲ್ಮೆಯಿಂದಂ ಬ್ರೂಟಸನದೇಂ ಕಡಿಮೆಯಿರಲಿಲ್ಲವೆಂದು. ಅಪ್ಪೊಡಾ ಬ್ರೂಟಸನೇ ಶೀಜರನಿಗೆದುರಾಂತುದೇತಕೆಂದಾತನು ಕೇಳ್ದೊಡೆ, ನನ್ನ ಉತ್ತರಮಿಂತೆ:-ಶೀಜರನನು ನಾನು ಪ್ರೀತಿಸಲಿಲ್ಲವೆಂದಲ್ಲ, ರೋಮನೇ ಹೆಚ್ಚಾಗಿ ಪ್ರೀತಿಸಿದುದರಿಂದ. ನಾವೆಲ್ಲ ದಾಸತ್ವದಲಿ ಸತ್ತು ಶೀಜರನು ಬದುಕಿರಲಾಶಿಪಿರಾ, ಶೀಜರನೆ ಮಡಿದು ನಾವೆಲ್ಲ ಸ್ವತಂತ್ರರಾಗಿರಲೆಳಸುವಿರಾ? ಶೀಜರನೆನ್ನ ಪ್ರೀತಿಸಿದುದರಿಂದ, ಅವನಿಗಾಗಳುವೆನಾಂ; ಭಾಗ್ಯಶಾಲಿಯಾಗಿದ್ದಂ, ಹರುಷಿಪೆನದಕಾಗಿ; ಕೆಚ್ಚೆದೆಯ ನಿಷ್ಠನಪ್ಪಂ, ಮನ್ನಿಪೆನದಕಾಗಿ; ಆದೊಡೆ, ಮಹತ್ವಾಕಾಂಕ್ಷೆಯಿಪ್ಪುದರಿಂ, ಕೊಲೆ ಗೈದೆನವನ. ಅವನನಲ್ಮೆಗೆ ಕಂಬನಿಗಳುಂಟು; ಸೊಬಗಿಗೆ ಸಂತಸಮಿರ್ಕೆ; ಧೈರ್ಯಕೆ ಮನ್ನಣೆಯಿರ್ಕೆ; ಮೇಣವನ ಮಹತ್ವಾಕಾಂಕ್ಷೆಗೆ ಮಿೞ್ತಿರ್ಕೆ; ದಾಸನಾಗಿರಲೆಳಸುವ ನೀಚನಾವನಿಹನಿಲ್ಲಿ? ಉಳ್ಳೊಡೆ, ಉಸುರಲಿ; ಅವನಿಗಾಂ ಅಪರಾಧಿಯಾಗುವೆನು. ರೋಮನನಾಗಿರಲಿಚ್ಛಿಸದ ಮರುಳ

ನಾರುಂಟು? ಉಳ್ಳೊಡೆ ನುಡಿಯಲಿ; ಅವನಿಗಾಂ ತಪ್ಪಿ ಸಗಿಹೆನು. ತನ್ನ ನಾಡನು ಪ್ರೇಮಿಸದ ನೀಚನಾವನಿಹನು? ಇದ್ದೊಡೆ, ನುಡಿಯಲಿ; ಅವನಿಗಾಂ ಅಪರಾಧಿಯಾಗಿಹೆನು, ಉತ್ತರಕ್ಕಾಗಿ ನಾಂ ಆಗುವೆನು.

ಎಲ್ಲರು:- ಇಲ್ಲಿಲ್ಲ, ಬ್ರೂಟಸನ್ನೆ, ಪರ್ವನುಂ ಇಲ್ಲ.

ಬ್ರೂ:- ಆದೊಡಾನಾರಿಗುಂ ಅಪರಾಧವೆಸಗಿಲ್ಲ. ನೀವೆನಗೆ ಗೈವುದನೆ ಗೈದಿಹೆನು ಶೀಜರನಿಗಾಂ. ಅವನ ಸಾವಿನ ಸಮಸ್ಯೆಯು ಕೋಟೆಯಲಿ ದಾಖಲಾಗಿಹುದು; ಯೋಗ್ಯಘನತೆಯನು ಕೀಳ್ಗಳೆಯದೆ ಮರಣದಾಡನೆಗೆ ಕಾರಣಮಪ್ಪ ತಪ್ಪುಗಳ ಹೆಚ್ಚಿಸದೆ.

(ಶೀಜರನ ಶವದೊಡನೆ ಆಂಟೊಾನಿಯುಮಿತರರು ಮಾಗಮಿಪರು.)

ಆಂಟೊನಿಯು ಶೀಜರನ ಶವದೊಡನೆ ಬರುತಿಹನು; ಅವನ ಮರಣವೊಳಿವನು ಕೈಹಾಕದಿದ್ದರುಂ, ಶೀಜರನ ಮರಣದಿಂದುಂಟಾದ ಲಾಭದಲಿ, ಪ್ರಜಾಪ್ರಭುತ್ವದಲಿ, ತಾಣವುಂಟವನಿಗುಂ; ನಿಮ್ಮೊಳಿದಾವನಿಗಿರದಿಹುದು? ರೋಮಿನ ಹಿತಕಾಗಿ ನಾನೆನ್ನ ಉತ್ಕೃಷ್ಟ ಗೆಳೆಯನನು ಕೊಂದಂತೆ, ಎನಗುಮಿದೇ ಕಠಾರಿಯುಂಟು, ಎನ್ನನಾಡಿಗೆನ್ನ ನಾವನಿಚ್ಚೆಯುಂಟಾದಂದು.

ಎಲ್ಲರೂ:- ಬದುಕಿರ್ಲಿ, ಬ್ರೂಟಸನೆ! ಬಾಳು! ಬಾಳು!

ಒಂದನೆ:- ಜಯೋತ್ಸವದೊಳವನ ಮನೆಗೆ ಕರೆದೊಯ್ವ.

ಎರಡನೆ:- ಪೂರ್ವಜರೊಡನವನ ವಿಗ್ರಹವ ನಿಲ್ಲಿಸಿರಿ.

ಮೂರನೆ:- ಶೀಜರನೊಲಿರಲವನು.

ನಾಲ್ಕನೆ:- ಶೀಜರನ ಪದವಿಗಳು
ಬ್ರೂಟಸನಿಗಿರವೇಳ್ಕು.

ಒಂದನೆ:- ಜಯಕಾರದಬ್ಬರದಿ ಮನೆಗೆ ಕರೆದೊಯ್ಯುವ.

ಬ್ರೂ:- ನನ್ನ ನಾಡವರೆ,—

ಎರಡನೆ:- ತೆಪ್ಪಸಿರಿ! ಸುಮ್ಮನಿರಿ! ಬ್ರೂಟಸನು
ನುಡಿಯುವನು.

ಒಂದನೆ- ಓ! ಸುಮ್ಮನಿರಿ.

ಬ್ರೂ:- ಮಾನ್ಯನಾಡವರೆ, ತೆರಳುವೆನು ನಾನಿನ್ನು.
ಮೇಣ್ ಎನ್ನ ಗೋಸುಗವಿಲ್ಲಿ ಆಂಟೊನಿಯೊ
ಡನೆ ನಿಲ್ಲಿರಿ:
ಶೀಜರನ ಶವವ ಮನ್ನಿಸಿರಿ. ಶೀಜರನ
ಘನತೆಯನು ಕುರಿತು ನಮ್ಮಗಳನುಜ್ಞೆಯಿಂ
ಆಂಟೊನಿಯು ಮಾಡಲಿಹ ಭಾಷಣವ
ಮನ್ನಿಸಿರಿ.

ಬೇಡಿಕೊಳ್ಳುವೆ ನಾನು, ಎನ್ನನುಸರಿದೋರ್ವ
ನುಂ ಕದಲದಿರಲಿ ಆಂಟೊನಿಯು ಭಾಷಣವ
ಮುಗಿವನ್ನಂ. [ಹೋಗುವನು]

ಒಂದನೆ: ಓ! ತಡೆಯಿರಿ, ಆಂಟೊನಿಗೆ ಕಿವಿಗೊಡುವ.

ಮೂರನೆ:- ಭಾಷಣದ ಗದ್ದುಗೆಗೆ ನಡೆಯಲಿ, ಕೇಳೋಣ
ಮಾನ್ಯನಹ ಆಂಟೊನಿ ಮೇಲೇರು.

ಆಂಟೊ:. ಬ್ರೂಟಸನದೆಸೆಯಿಂದ ಮಹದುಪಕಾರ
ವಾಯ್ತೆನಗೆ.

[ಗದ್ದುಗೆಗೆ ನಡೆಯುವನು.]

ನಾಲ್ಕನೆ:- ಬ್ರೂಟಸನ ಕುರಿತವನು ಏನಹೇಳುವನು?

ಮೂರನೆ:- ಬ್ರೂಟಸನ ಕಡೆಯಿಂದ
ನಮ್ಮೆಲ್ಲರಿಗುಮವನು ಋಣಬದ್ಧನಿಹನೆಂದು
ಹೇಳುವನು.

ನಾಲ್ಕನೆ:- ಈ ಸ್ಥಳದಿ ಬ್ರೂಟಸನ ಕುರಿತವನು ಕೇಡನೇ
ನುಡಿಯದಿರಲೊಳಿತಕ್ಕು.

ಒಂದನೆ:- ಕ್ರೂರನಿದ್ದನೀ ಸೀಜರನು.

ಮೂರನೆ:- ದಿಟವದು:
ಅವನಿಂದ ದೂರಾದುದೊಳಿತಾಯ್ತು.

ಎರಡನೆ:- ಆಂಟೊನಿಯು ಹೇಳ್ವುದನು ಕೇಳೋಣ.

ಅಂಟೋ:- ಕುಲೀನ ರೋಮನರೆ,—

ಎಲ್ಲರೂ: ಓ! ಗಮ್ಮನಿರಿ; ಹೇಳುವುದ ಕೇಳ್ಳೋಣ.

ಅಂಟೋ:- ಗೆಳೆಯರೇ, ರೋಮನರೆ, ದೇಶೀಯರೇ, ಕೇಳಿ:
ಶೀಜರನ ಹೂಳಿಡಲು ಬಂದಿಹೆನು, ಹೊಗಳುವುದಕಲ್ಲ
ನರರೆಸಗುವಾಕೆಡುಗು ಅವರೊಡನೆಸಾಯುದದು;
ಒಳಿತ ಹೂಳುವರವರ ಮೂಳೆಗಳೊಂದಿಗೆ;
ಶೀಜರನದಂತೆಯೇ. ಘನವಂತಬ್ರೂಟಸನು
ಶೀಜರನಿಗಧಿಕಾರದಾಕಾಂಕ್ಷೆಯಿತ್ತೆಂದು ಹೇಳಿಹನು:
ಇರುತಿರಲಂತದುಂ, ದೊಡ್ಡನೇರವೆ ತಾನೆ.
ಅದಕಾಗಿ ಶೀಜರನು ಜೆಳಿದಿಹನು ಬಿತ್ತಿದ್ದ.
ಇಲ್ಲಿನಾಂ ಬ್ರೂಟಸನ ಮೇಣಿತರರನುಜ್ಞೆಯಲಿ,-
ಬ್ರೂಟಸನು ಘನವಂತ, ಅವರೆಲ್ಲರಂತೆಯೇ,
ಘನವಂತರೆಲ್ಲರುಂ,
ಬಂದಿಹೆನು ಶೀಜರನ ಉತ್ತರ ಕ್ರಿಯಯಲಿ ನುಡಿಯೆ.
ಎನ್ನ ಸಖನಿದ್ದನವ, ವಿಶ್ವಾಸಿ ಮೇಣ್ ನ್ಯಾಯ
ಪರನೆನಗೆ;
ಆದೊಡೆಯು ಅಧಿಕಾರದಾಶೆಯಿತ್ತವಗೆಂದು
ಹೇಳುವನು ಬ್ರೂಟಸನು; ಸನ್ಮಾನಿಯಿಹನವನು,
ಸೆರೆಯಾಳುಗಳ ತರುತಲವರಿತ್ತ ಹಣದಿಂದ
ನಮ್ಮ ನಾಡಿನ ಭಂಡಾರ ತುಂಬಿಸಿಹನು;

ಶೀಜರನೊಳೀಗೆಯ್ತು ಯಾಕಾಂಕ್ಷೆ ಯಿಂದಾಯ್ತು?
ಬಡಜನರು ಗೋಳಿಡಲು, ಶೀಜರನು ಅತ್ತಿಹನು:
ಅಧಿಕಾರದಾಕಾಂಕ್ಷೆಯತಿಕಠಿಣ ವಿರಬೇಕು.
ಆದೊಡೆಯು ಶೀಜರನು ಆಕಾಂಕ್ಷೆಯುತನೆಂದು
ಬ್ರೂಟಸನು ಹೇಳುವನು; ಸನ್ಮಾನಿತಾನಿಹನು.
ಲೂಪರಿಕಲುತ್ಸವದಿ ‡ ನೀವೆಲ್ಲ ನೋಡಿದಿರಿ,
ಮಕುಟವನು ಮೂರುಸೂಳಿತ್ತೆ ನಾನವಗೆ.
ಧಿಃಕರಿಸಿ ಬಿಟ್ಟನದ ಮೂರುಸಲವೂ:
ಆಕಾಂಕ್ಷೆಯೇಯಿದು?
ಆದೊಡೆಯು ಆಕಾಂಕ್ಷೆಯುವನೆಂದು ಬ್ರೂಟಸನು
ಹೇಳುವನು;
ಮೇಣ್. ನಿಜದಿ, ಮಾನ್ಯನಿಹನವನು.
ಬ್ರೂಟಸನು ಹೇಳಿದುದ ಅಲ್ಲಗಳೆಯಲಾನಿಲ್ಲ.
ಎನಗೆ ತಿಳಿದಂತುಟನು ಹೇಳಲಿರುವೆನಿಲ್ಲಿ.
ಒಮ್ಮೆ ನೀವೆಲ್ಲರವನ ನೆಚ್ಚಿದಿರಿ, ಕಾರಣವದಕಿತ್ತು.
ಆವಕಾರಣಕಾಗಿ ರೋದಿಸದಿಹುದೀಗ?
ನ್ಯಾಯುವೇ! ಕ್ರೂರ ಮೃಗಗಳ ಪಾಲಾದೆ ನೀನು:
ಮಾನವರು ಜ್ಞಾನ ಶೂನ್ಯರಾಗಿಹರು.
ಎನ್ನ ಹೃದಯುವಲ್ಲಿ ಶವದ ಕರಡಿಗೆಯಲಿ

---

‡ ರೋಮಿನಲ್ಲಿ ಒಂದು ಸಾರ್ವಜನಿಕ ಉತ್ಸವ.

ಸೀಜರನ ಬಳಿಯಿಹುದು,
ಮತ್ತಮದು ಮರಳುವನ್ನವಾಂ ತಡೆಯ.

ವೇಕ್ಷ್ಯಂ.

ಒಂದನೆ: ಆವನ ಹೇಳಿಕೆಯೊಳಮಿತ ನ್ಯಾಯವಿಹುದೆಂದೆನಗೆ
ತೋರುವುದು.

ಎರಡನೆ:- ಸೀಜರನಿಗಪಾರ ಅನ್ಯಾಯ ವಾಯ್ತೆಂದು,
ಸರಿಯಾಗಿ ಪರಿಕಿಸಲು ತಿಳಿಯುವುದು.

ಮೂರನೆ:- ಅಂತಾಯ್ತೆ, ಸಖರ?
ಅವನ ತಾಣಮೊಳನಿಷ್ಟ ಬರುವುದೆಂಬ
ಭಯವೆನಗೆ.

ನಾಲ್ಕನೆ:- ಕೇಳಿದಿರಾ? ಮುಕುಟವನು ಸ್ವೀಕರಿಸಲಿಲ್ಲವನು:
ಆದರಿಂದ ಆಕಾಂಕ್ಷೆಯಿಲ್ಲೆಂಬುದಿದು ನಿಜವು.

ಒಂದನೆ:- ಅಂತಹುದು ನಿಜವಿರಲು, ಪ್ರತಿಫಲವನಾರಾದೊ-
ಡನುಭವಿಸಲೇ ಬೇಕು.

ಎರಡನೆ:- ಬಡಪ್ರಾಣಿ! ಅತ್ತತ್ತು ಬೆಂಕಿಯೊಲು, ರಕ್ತದೊಲು,
ಕೆಂಪಗಿಹವವನ ಕಣ್ಗಳು.

ಮೂರನೆ:- ಆಂಟೊನಿಗೆ ಸಮನಾದ ಮಾನ್ಯಮಾನವನಿಲ್ಲ
ರೋಮಿನೊಳು.

ನಾಲ್ಕನೆ:- ಈಗ ಗಮನಿಸಿರಿ, ಮತ್ತೊಮ್ಮೆ ಹೇಳಲುದ್ಯುಕ್ತ-
ನಾಗುವನು.

ಆಂಟೊ:- ಮೇಣ್ ನಿನ್ನೆ ಸೀಜರನ ವಾಕ್ಯವೊಂದೇ ಜಗವ-
ನೆದುರಿಸ ಬಹುದಿತ್ತು; ಈಗ ಕೆಡೆದಿಹನಿಲ್ಲಿ,
ಮತ್ತವನ ಗೌರವಿಪ ನೀಚನಿಲ್ಲೊರ್ವನುಂ.
ಬಂಧುಗಳೆ, ನಾನಿಮ್ಮ ಹೃದಯಾಂತರಂಗಗಳ
ಉಗ್ರತೆಗೆ ಮೇಣ್ ದಂಗೆಗೆಬ್ಬಿಸುವುದಿದ್ದರೆ,
ಬ್ರೂಟಸಗೆ, ಕ್ಯಾಸ್ಯಸಗೆ ನೇರಗೈದಂತಕ್ಕು.
ನೀವೆಲ್ಲರರಿದಂತೆ ಜಸವಂತರವರಿಹರು,
ತಪ್ಪೆಸಗೆನವರಿಗಾಂ, ಅಂತಪ್ಪ ಮಾನ್ಯರಿಗೆ
ತಪ್ಪೆಸಗುವುದಕಿಂತ ಮಡಿದವಗೆ ,
ನಾಂ ನನಗೆ, ಮೇಣ್ ನಿಮಗೆ ನೇರಗೈವೆ.
ಆದೊಡಿಲ್ಲಿದೆ ನೋಡಿ, ಚರ್ಮಪತ್ರವೊಂದು,
ಸೀಜರನ ಮುದ್ರೆಯಿಂ.
ಇದನವನ ಕರಡಿಗೆಯಲಿ ಕಂಡೆ, ಮರಣಶಾಸನ-
ವಿದು
ಸಾಮಾನ್ಯ ಜನರೊಂದೆ ಕೇಳಲೀಪತ್ರವನು.
ಹಾ! ಕ್ಷಮಿಸಿರಾ! ನಾನಿದನೋದಲಾರೆ.
ಮೃತನಾದ ಸೀಜರನ ಗಾಯಗಳ ಚುಂಬಿಸದೆ
ಬಿಡರವರು,
ಕರವಸ್ತ್ರಗಳನವನ ಪರಿಶುದ್ಧ ರಕ್ತದಲಿ

ನನೆಸುವರು.
ಆಹುದಹುದು! ಜ್ಞಾಪಕಾರ್ಥಕವನ ಕೇಳುವನು
ಬೇಡುವರು.
ವಂಶಪಾರಂಪರ್ಯ ಹಕ್ಕುಪಡೆಯುತಲದನು
ಸಂತಾನದಾಸ್ತಿಯೊಲು ಶಾಸನದಿ ಶಾಸಿಪರು.

ಸಾಕ್ಷಿನ:- ಶಾಸನವ ಕೇಳುವೆವು: ಓದದನು, ಆಂಟೊನಿ.

ಎಲ್ಲರೂ:- ಶಾಸನಂ, ಶಾಸನಂ! ಶೀಜರನ ಶಾಸನವ
ಕೇಳುವೆವು.

ಆಂಟೊ:- ಶಾಂತರಾಗಿರಿ, ಸಖರೆ: ಓದಬಾರದದನು.
ಶೀಜರನು ತಾನಿಮ್ಮ ಪ್ರೀತಿಸಿದ ಪರಿಯ
ತಿಳಿಯುವುದು ಹಿತವಲ್ಲ.
ಕಾಷ್ಠವಲ್ಲವು ನೀವು, ಶಿಲೆಗಳಲ್ಲವು ನೀವು,
ಮಾನವರು:
ಮಾನವರಾಗಿಯುಂ, ಶೀಜರನ ಶಾಸನವ
ಕೇಳುವುದೆ?
ರೇಗಿಪುದು ನಿಮ್ಮನದು, ಹುಚ್ಚರಾಗಿಪುದದು.
ನೀವವನ ವಾರಸ್ತರೆಂಬುದನು ಅರಿಯದಿಹು-
ದೊಳ್ಳೆಯದು.
ತಿಳಿವುದಾದರೆ, ಆಕಟ! ಅದರಿಂದಲೇನಹುದೊ!

ನಾಲ್ಕನೆ: ಓದು ಶಾಸನವ! ಕೇಳುವೆವು ನಾವದನು,
ಆಂಟೋನಿ.

ಓದಲೇಬೇಕದನು, ಶೀಜರನ ಶಾಸನವ

ಆಂಟೊ:- ಶಾಂತರಾಗುವಿರಾ? ಒಂದು ಕ್ಷಣ ತಾಳುವಿರಾ?
ಅದರ ವಿಷಯವ ನಿಮಗೆ ತಿಳಿಸಿ ನಾಂ
ಹೆಚ್ಚಿನವ್ಯಾಸಕೆ ದುಡುಕಿದೆನು.
ಆರ ಚೂರಿಗಳು ಶೀಜರನ ಇಕ್ಕಿದವೋ,
ಅವರಿಗಾಂ ಕೇಡುಗೈವೆನೆಂಬ ಭಯವುಂಟು.

ನಾಲ್ಕನೆ:- ಕೊಲೆಗಡಕರವರು; ಘನವಂತರಂತೆ!

ಎಲ್ಲರೂ:- ಮೃತಿಪತ್ರ, ಮರಣಶಾಸನ!

ಎರಡನೆ:- ಖಳರವರು, ಕೊಲೆಗಡಕರು. ಮೃತಿಪತ್ರಂ!
ಮರಣಶಾಸನವನೋದು!

ಆಂಟೊ:- ಮೃತಿಪತ್ರವನೋದೆಂದು ಒತ್ತಾಯ-
ಪಡಿಸುವಿರಾ?
ಶೀಜರನ ಸುತ್ತಲುಂ ವ್ಯೂಹವನು ನೇಮಿಸಿರಿ.
ಮೃತಿಪತ್ರವನು ಬರೆದವನ ತೋರುವೆಂ.
ಇಳಿಯಲೇ? ಮೇಣೆನಗೆ ಅಪ್ಪಣೆಯ
ಕೊಡುವಿರಾ?

ಎಲ್ಲರೂ:- ಬಾ ಕೆಳಗೆ.

ಎರಡನೆ:- ಇಳಿ ಬೇಗ.

ಮೂರನೆ.- ಅಪ್ಪಣೆಯನಿತ್ತಿಹೆವು.

ನಾಲ್ಕನೆ: ವರ್ತುಲಂ; ಸುತ್ತಲುಂ ನಿಲ್ಲಿರಿ.

ಒಂದನೆ:- ಶವದಕರಡಿಗೆಯುತ್ತಣಿಂ ದೂರದಲಿ ನಿಲ್ಲಿರೈ.

ಎರಡನೆ: ಆಂಟೊನಿಗೆ ಸ್ಥಳವಿರಲಿ, ಮಾನ್ಯ ಆಂಟೊನಿಗೆ.

ಆಂಟೊ:- ಇಂತು ಮೇಲ್ಬೀಳದಿರಿ; ದೂರದಲಿ ನಿಲ್ಲಿರಿ.

ಎಲ್ಲರೂ: ಹಿಂದಕೆ ನಿಲ್ಲಿರಿ! ಸ್ಥಳಂ! ಹಿಂದಕೆ ಸರಿಯಿರಿ!

ಆಂಟೊ:- ಕಂಬನಿಗಳಿರೆ ನಿಮಗೆ, ಸಿದ್ಧರಾಗಿರವನು
ಸುರಿಸಲೀಗ.
ಈಯುತ್ತರೀಯದ ನಿಜಪರಿಚಯವು
ನಿಮಗುಂಟು.
ಇದನವನು ಮೊದಲಸಲ ಧರಿಸಿದರಿವೆನಗುಂಟು:
ಅವನ ಡೇರೆಯುಳೊಂದು ಬೇಸಗೆಯ
ಸಂಜೆಯಲಿ;
ಕಾಳಗದಿ ನೆರ್ವೀ†ಯರನು ಗೆಲ್ದನಾದಿನದಿ.
ಪರಿಕಿಸಿರಿ, ಈ ಸ್ಥಳದಿ ಕ್ಯಾಸ್ಸಿಯಸನ ಚೂರಿತಾ
ನಟ್ಟಿತು.
ನಿಟ್ಟಿಸಿರಿ, ಕ್ಯಾಸ್ಕನು ಮತ್ಸರದೊಳಿಂತು
ಹರೆಗಡಿದ.

---

† ಜರ್ಮನ್ ಸಂತತಿಯ ಒಂದು ಜನಾಂಗ.

ಇದರೊಳೀ ಇರಿದವನ್ನೈ ಪ್ರಿಯಮಿತ್ರ
ಬ್ರೂಟಸನು.
ಮೇಣವನು ತನ್ನ ಹಾಳು ಬಾಳನಿಂದೆ ಕೀಳುತಿರೆ,
ಗುರುತಿಸಿರಿ, ಸೀಜರನ ರಕ್ತವೆಂತಾತುರವಾಗಿದನು
ಹಿಂಬಾಲಿಸಿತು
ಹೊರಬಂದು, ಬ್ರೂಟಸನು ನಿರ್ದಯದೊ-
ಳಿಕ್ಕಿದುದು ದಿಟವೊ ಸಟೆಯೋ ತಿಳಿಯೆ.
ನೀವೆಲ್ಲರರಿವಂತೆ, ಬ್ರೂಟಸನು ಸೀಜರನ
ಆತ್ಮವೇ ಆಗಿದ್ದ.
ಪರಿಕಿಸಿರಿ, ಬಾನವರೆ, ಸೀಜರನದೆಂತವನ
ಪ್ರೀತಿಸಿದ!
ಎಲ್ಲವೆಟ್ಟುಗಳಿಂದ ಕ್ರೂರತಮವಿದುವೆ:
ಪತಕನಲಿವನಿಕ್ಕಿದುದ ಸೀಜರನು ಕಂಡೊಡನೆ,
ವಿಶ್ವಾಸಘಾತವದು ದ್ರೋಹಿಗಳ ತೋಳಿಂದ
ಅಧಿಕ ಶಕ್ತಿಯೆಳ್ಕೈಸೆ ಜೈಸಿತವನ.
ಆಗವನ ಹೃದಯವದು ನುಚ್ಚುನೂರಾಯ್ತು.
ಮೇಣ್ ತನ್ನ ವದನವನು ಉತ್ತರೀಯದಿ ಮುಚ್ಚಿ,—
ಅಸಿತರೊಳು ನೆತ್ತರಿಂ ಮಿಂದು ಕೆಂಪೇರ್ದಿರ್ದ,

ಪಾಂಪೆ* ಯಾ ವಿಗ್ರಹದ ಕಾಲ್ಬದಿಯೊಳುರುಳ್ದನೈ.
ಓ! ಎನ್ನ ನಾಡವರೆ, ಎಂಥ ಅವನತಿಯಿದು!
ಆಗಲೇ, ನಾವೆಲ್ಲರುಮಧೋಗತಿಗೈದಿದೆವು.
ಕೊಲೆಗಡಕರಾದವರ ಜಯವನಿತೆ ವರಿಸಿದಳು.
ಅಕಟಕಟ! ಅಳುವಿರಿ ನೀವ್ ಈಗ.
ದಯೆಯ ಚಿಹ್ನೆಯುದಂಕುರಿಸಿದಂತಿದೆ:
ಪೂತಕಂಬನಿಗಳಿವು.
ಏನಿದು? ಅಳುವಿರೇಂ ನಮ್ಮ ಶೀಜರನ
ಉಡಿಗೆಯೊಂದಕೆ ಘಾಸಿಯಾದುದಕೆ?
ನೋಡಿರಿತ್ತ.
ಕಣ್ಣಾರೆ. ಇಲ್ಲಿಹನವನೆ, ಘಾತಕರಿಂ ಹತನಾಗಿ.

ಒಂದನೆ:- ಅಯ್ಯೋ! ದುಃಖಕರ ನೋಟಂ!
ಎರಡನೆ: ಅಕಟಕಟಾ! ಮಾನ್ಯ ಶೀಜರಂ!
ಮೂರನೆ:- ಭಯಂಕರ ದಿನಂ!
ನಾಲ್ಕನೆ:- ದ್ರೋಹಿಗಳು! ಖಳರು!
ಒಂದನೆ:- ರಕ್ತಮಯ ದೃಶ್ಯಂ!

---

*ಪಾಂಪೆ: ಶೀಜರನ ಶತ್ರು. ಇವನು ಶೀಜರನೊಡನೆ ಯುದ್ಧಮಾಡಿ ಪರಾಜಿತನಾಗಿ, ಓಡಿಹೋಗಿ, ಅಲೆಗ್ಝಾಂಡ್ರಿಯಾದಲ್ಲಿ ಕೊಲ್ಲಲ್ಪಟ್ಟನು. ಜಯಶಾಲಿಯಾದ ಶೀಜರನು ಆಗ್ಗೆ ನೆಲಕ್ಕೆ ಬಿದ್ದಿದ್ದ ಪಾಂಪೆಯ ವಿಗ್ರಹವನ್ನು ಮತ್ತು ನಿಲ್ಲಿಸಿದ್ದನು.

ಎರಡನೆ:- ಸೇಡತೀರಿಸಿಕೊಳ್ವ.

ಎಲ್ಲರೂ:- ಪ್ರತೀಕಾರ! ನಡೆಯಿರಿ! ಅರಸಿರಿ! ದಹಿಸಿರಿ!
ಕೊಲ್ಲಿರಿ! ಕಡಿಯಿರಿ! ಘಾತಕನೊರ್ವನು
ಮಿರದಂತೆ!

ಆಂಟೊ:- ತಡೆಯಿರಿ, ನಾಡವರೆ.

ಒಂದನೆ:- ಸುಮ್ಮನಿರಿ! ಆಂಟೊನಿಗೆ ಕಿವಿಗೊಡಿರಿ.

ಎರಡನೆ:- ಲಾಲಿಪೆವವನ ನುಡಿಯ, ಅವನನನುಸರಿಪೆವು,
ಅವನೊಡನೆ ಮಡಿಯುವೆವು.

ಆಂಟೊ:- ಸಭ್ಯಸ್ನೇಹಿತರೆ, ಪ್ರೀತಿಯ ಗೆಳೆಯರೆ, ನಾಂ
ನಿಮ್ಮನೀಪರಿಯ ದಂಗೆಗೇಳಿಸುವುದೊಳಿತಲ್ಲ.
ಈ ಕಾರ್ಯಗೈದವರು, ಮಾನ್ಯರಿಹರವರು.
ಇದನವರು ಗೈವುದಕೆ ಮೂಲಕಾರಣಮುಪ್ಪ
ಇನ್ನಾವ ಸಂಕಟಗಳಡಗಿಹವೋ, ಪಾಪ!
ನಾನರಿಯೆ;
ಧೀಮಂತರುಮಂತೆ, ಮಾನ್ಯರಿಹರವರು,
ಮೇಣ್ ಚಾಣ್ಮೆಯಿಂದಲೆ ನಿಮಗೆ
ಉತ್ತರವನೀಯುವರು.
ಸ್ನೇಹಿತರೆ, ನಾ ನಿಮ್ಮ ರೇಗಿಸಲು ಬಂದಿಲ್ಲ.
ಬ್ರೂಟಸನೊಲಾನೇನು ಪ್ರವಚನಿಯುಮಲ್ಲ;

ಆಪ್ಪೊಡೆ, ನೀ ವೆಲ್ಲರರಿವಂತೆ, ಗೆಳೆಯನನು
ಪ್ರೇಮಿಸುವ
ಮೊರಟನಿಹೆ ನಾನು; ಇದನವರು ಬಲ್ಲರ್ರು,
ಆವನಕುರಿತೆರಡು ಮಾತಾಡಲೆನಗಾಣತಿ-
ಯಿತ್ತವರು.
ನರರ ರಕುತವ ಕಲಕಿಸಲು ತಿಳುವಳಿಕೆಯಿಲ್ಲೆನಗೆ,
ವಾಕ್ಸರಣಿಯಿಲ್ಲ, ಶಬ್ದಚತುರತೆಯಿಲ್ಲ,
ಮತ್ತಮಾಭಾಷಣಶಕ್ತಿಯುಮಿಲ್ಲ:
ಸುಮ್ಮನೆ ಹೇಳುವೆನು; ನಿಮಗೆ ತಿಳಿದುದ-
ನೊರೆಯುವೆನು.
ನಿಮಗೆ ನಾಂ ಪ್ರಿಯನಪ್ಪ ಶೀಜರನ ಗಾಯಗಳ,
ಮೂಕಬಾಯಿಗಳ, ತೋರಿಸುತಲವುಗಳಂ
ನುಡಿಯ ಬಯಸುವೆನು.
ಆದೊಡಾನೆ ಬ್ರೂಟಸನಾಗಿ, ಬ್ರೂಟಸನೆ
ಆಂಟೋನಿ ಯಾಗಿರ್ದೊಡೆ,
ರೋಮಿನ ಶಿಲೆಗಳಂ ದಂಗೆಗೇಳಿಸುವಂಥ
ನಾಲಗೆಯ ನಿಡುವ ಆಂಟೋನಿಯಪ್ಪುದಿತ್ತು.

ಎಲ್ಲರೂ:-ದಂಗೆಯೇಳುವೆವಾವು.

ಒಂದನೆ:- ಬ್ರೂಟಸನ ಮಂದಿರವ ದಹಿಸುವೆವು.

ಮೂರನೆ:-ನಡೆಯಿರಿ! ಬನ್ನಿರಿ! ಪಿತೂರಿಗರನರಸಿರಿ.
ಆಂಟೊ: ಇನ್ನು ನಾಲಿಸಿರೆನ್ನ ನಾಡವರೆ; ಹೇಳ್ವುವನು
ಕೇಳಿರಿ.
ಎಲ್ಲರೂ:-ಗಮ್ಮನಿರಿ! ಆಂಟೊನಿಗೆ ಕಿವಿಗೊಡಿರಿ,
ಮಾನ್ಯನಹ ಆಂಟೊನಿಗೆ.
ಆಂಟೊ:- ಏತಕದು ಸಖರೆ, ಏನೆಂಬುದರಿಯದಲೆ ಮಾಡ-
ಲೆಳಸುವಿರಿ:
ನಿಮ್ಮ ನಲುಮೆಗವನರ್ಹನಿಹನೆಂತು?
ಅಕಟಕಟಾ, ಅರಿವಿಲ್ಲ,—ನಾನೇ ಹೇಳಬೇಕು;
ನಾವೇಳ್ದ ಉಯಿಲಿನಾವಿಷಯವನೆ ಮರೆತಿಹಿರಿ.
ಎಲ್ಲರೂ:-ನಿಜ, ನಿಜ: ಮೃತಿಪತ್ರ! ತಡೆದು ನಾವ್
ಮರಣಶಾಸನವನಾಲಿಸುವ.
ಆಂಟೊ:-ಇಲ್ಲಿಹುದು ಮೃತಿಪತ್ರ, ಶೀಜರನ ಮುದ್ರೆಯಿಂ:—
ಪ್ರತಿಯೊಬ್ಬ ರೋಮನಗೆ, ಒರ್ಒರ್ವ, ವ್ಯಕ್ತಿಗೆ
ಎಪ್ಪತ್ತು ಮೇಲೈದು ಡ್ರಾಕ್ಮ*ಗಳನೀಯುವನು.
ಎರಡನೆ:- ಬಹುಮಾನ್ಯ ಶೀಜರಂ! ಅವನ ಮರಣದಸೇಡ
ತೀರಿಸದೆ ಬಿಡೆವಾವು.
ಮೂರನೆ:-ಹಾ! ದಿವ್ಯ ಶೀಜರಂ!

---

* $9\frac{3}{4}$ ಪೆನಿ ಬೆಲೆಯ ಒಂದು ಪ್ರಾಚೀನ ಗ್ರೀಕ್ ನಾಣ್ಯ.
೭೫ ಡ್ರಾಕ್ಮಗಳು; ಸುಮಾರು ಮೂರು ಪವನು (ಸವರನು) ಗಳು.

ಆಂಟೋ:- ಶಾಂತಿಯಿಂ ಲಾಲಿಸಿರಿ.

ಎಲ್ಲರೂ:- ಹೋ! ಗಮ್ಮನಿರಿ!

ಆಂಟೋ:- ಮೇಣವನು ತನ್ನ ರಾಜಬೀದಿಗಳನೆಲ್ಲ
ನಿಮಗಾಗಿ ಗಳಿಸಿಕೊಟ್ಟಿಹನು.
ಎಲೆವನೆಗಳಂ, ಹೊಸ ನಂದನಗಳಂ
ಗಳಿಸಿಹನು, ಟೈಬರಿನ* ಈಕಡೆಯ ದಂಡೆಯಲಿ,
ನಿಮಗಾಗಿ, ಮೇಣ್ ನಿಮ್ಮ ಸಂತತಿಗನವರತಂ.
ಸಾಮಾನ್ಯ ತೋಪುಗಳ ಗಳಿಸಿಹನು ನಿಮಗಾಗಿ,
ವಿಹರಿಸುತ್ತವುಗಳೊಳು ಬಿನದ ಪಡಲೆಂದು.
ಇಲ್ಲಿದ್ದನೋರ್ವನೆ ಸೀಜರನು! ಆವಕಾಲಕೆ
ಬರುವಂ ಮತ್ತೋರ್ವನಿಂತಪ್ಪ ಮಾನವಂ?

ಒಂದನೆ:- ಇಲ್ಲಿಲ್ಲ! ಹೊರಟುಬನ್ನಿರಿ:
ಅವನ ದೇಹವ ನಾವು ಪೂತತಾಣದಿ ಸುಡುವ.
ಆಕಿಡಿಗಳಿಂ, ಪಿತೂರಿಗರ ಗೇಹಗಳ ಸುಡುವ.
ಎತ್ತಿರಿ ಶವವನು.

ಎರಡನೆ:- ಹೋಗಿ ಅಗ್ಗಿಯ ತನ್ನಿ.

ಮೂರನೆ:- ಬೆಂಚುಗಳನೆಳೆಯಿರಿ.

---

* ಟೈಬರ್:- ಒಂದು ನದಿ. ಇದರ ದಡವಲ್ಲಿ ಪ್ರಾಚೀನ ರೋಮ್ ನಗರವಿದೆ

ಸಾಲ್ವಸೆ:- ಮಣಿಗಳಂ, ಕಿಟಿಕಿಗಳ್, ಏನನಾವರು ತನ್ನಿ.

( ತನಮೊಡನೆ ನಾಗರೀಕರು ನಡೆಯುವರು. )

ಆಂಟೊ:-ನಡೆಯುಲಿ ತಾನಾಗಿ. ವಿಪ್ಲವವೆ, ನೀ ಮುಂದೆ
ಸಾಗಿರುವೆ.

ನಿನ್ನ ಬಗೆಗೆ ಬಂದ ಪಥವ ನೀನನುಸರಿಸು!



ವಿಠಲ ಮುದ್ರಣಾಲಯ ತೇರು ಬಜಾರು, ಬಳ್ಳಾರಿ.